

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 327 |
| ಸದಸ್ಯರ ಹೆಸರು | ಶ್ರೀ ಕಾಂತರಾಜ್ (ಬಿಎಂಎಲ್)<br>(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 14.09.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ, ಹಿರಿಯ ನಾಗರಿಕರ ಸಬಲೀಕರಣ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್ (DMFT) ಗಳು ಅಸ್ತಿತ್ವದಲ್ಲಿ ಇವೆಯೇ; ಹಾಗಿದ್ದಲ್ಲಿ ಅವು ಯಾವುವು; ಇದರ ಸ್ಥಾಪನೆಯ ಉದ್ದೇಶಗಳೇನು (ವಿವರವಾದ ಮಾಹಿತಿ ಒದಗಿಸುವುದು) | ಭಾರತ ಸರ್ಕಾರವು MM(D&R) Act 2015 ರ ತಿದ್ದುಪಡಿ ಸೆಕ್ಷನ್ 9(ಬಿ) ರಂತೆ ಜಿಲ್ಲಾ ಖನಿಜ ಪ್ರತಿಷ್ಠಾನ ಎಂಬ ಲಾಭರಹಿತ ಟ್ರಸ್ಟ್ ಸ್ಥಾಪಿಸಲು ಸೂಚಿಸಿರುತ್ತದೆ. ಅದರಂತೆ ರಾಜ್ಯದಲ್ಲಿ ಎಲ್ಲಾ 30 ಜಿಲ್ಲೆಗಳಲ್ಲಿ ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್ (DMFT) ಸ್ಥಾಪಿಸಿ ಅಸ್ತಿತ್ವದಲ್ಲಿರುತ್ತದೆ. ಸದರಿ ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್ ಗೆ ಸಂಬಂಧಿಸಿದಂತೆ ಸಂಗ್ರಹವಾಗುವ ಡಿಎಂಎಫ್ ಮೊತ್ತವನ್ನು ಗಣಿ ಬಾಧಿತ ಪ್ರದೇಶಗಳ ಅಭಿವೃದ್ಧಿ ಹಾಗೂ ಜನರ ಕಲ್ಯಾಣಕ್ಕಾಗಿ ನಿಧಿಯನ್ನು ಬಳಸುವುದು ಟ್ರಸ್ಟ್‌ನ ಮುಖ್ಯ ಉದ್ದೇಶವಾಗಿರುತ್ತದೆ.<br>ಮುಂದುವರೆದು, ಪ್ರಧಾನ ಮಂತ್ರಿ ಖನಿಜ ಕ್ಷೇತ್ರ ಕಲ್ಯಾಣ ಯೋಜನಾ (PMKKKY). ಅಂಶಗಳನ್ನು ಅಳವಡಿಸಿ ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್ ನಿಯಮಗಳು (DMFT) ದಿನಾಂಕ 11.01.2016 ರಂದು ಜಾರಿಗೆ ತಂದಿದ್ದು ನಂತರ ನಿಯಮಗಳಿಗೆ ದಿನಾಂಕ 25.07.2016, 08.03.2018 .ಹಾಗೂ ದಿನಾಂಕ 06.05.2020 ರಂದು ತಿದ್ದುಪಡಿಯನ್ನು ತಂದಿರುತ್ತದೆ. |
| ಆ) | ಸದರಿ ಟ್ರಸ್ಟ್ ಗಳ ಅಡಿಯಲ್ಲಿ ಲಭ್ಯವಿರುವ ಅನುದಾನವೆಷ್ಟು; ಸದರಿ ಅನುದಾನವನ್ನು ಯಾವ ಮೂಲದಿಂದ ಶೇಖರಿಸಲಾಗಿದೆ. (ಜಿಲ್ಲಾವಾರು ಮಾಹಿತಿ ಒದಗಿಸುವುದು) | ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್ ನಲ್ಲಿ 2015-16 ರಿಂದ 2021-22 (ಜುಲೈ-2021) ಅಂತ್ಯದವರೆಗೆ ರೂ. 2784.65 ಕೋಟಿ ಸಂಗ್ರಹಿಸಲಾಗಿರುತ್ತದೆ. ಡಿಎಂಎಫ್ ಮೊತ್ತವನ್ನು ಎಂಎಂ (ಡಿ&ಆರ್) ತಿದ್ದುಪಡಿ ಕಾಯ್ದೆ, 2015 ದಿನಾಂಕ 12.01.2015 ಮತ್ತು ಕೆ.ಎಂ.ಎಂ.ಸಿ (ತಿದ್ದುಪಡಿ) ನಿಯಮಗಳು, 2016 ದಿನಾಂಕ12.08.2016 ರನ್ವಯ ಹರಾಜು ರಹಿತ ಮಂಜೂರು ಮಾಡಲಾದ ಗಣಿ / ಕಲ್ಲುಗಣಿ ಗುತ್ತಿಗೆ ಪ್ರದೇಶದಿಂದ ರಾಜಧನದ ಮೇಲೆ ಶೇ.30 ಹಾಗೂ ಶೇ.10 ರಷ್ಟು ಅನ್ವಯವಾಗುವಂತೆ ನಿಧಿಯನ್ನು ಸಂಗ್ರಹಿಸಲಾಗುತ್ತಿದೆ. **(ಜಿಲ್ಲಾವಾರು ಮಾಹಿತಿ ಅನುಬಂಧ-1 ರಲ್ಲಿ ನೀಡಲಾಗಿದೆ.)** |
| ಇ) | ಈ ಅನುದಾನವನ್ನು ಯಾವ ಯಾವ ಕಾರ್ಯಗಳಿಗೆ ವಿನಿಯೋಗಿಸಲಾಗುವುದು; ಇದರ ಸಂಬಂಧ ಹಾಲಿ ಇರುವ ಮಾರ್ಗ ಸೂಚಿಗಳೇನು; ಇಲ್ಲಿಯವರೆಗೆ ಖರ್ಚಾಗದೆ ಉಳಿದಿರುವ ಅನುದಾನವೆಷ್ಟು? | DMFT-2016 ರ ನಿಯಮ 18(2) ರಂತೆ ಡಿಎಂಎಫ್ ನಿಧಿಯಲ್ಲಿ ಸಂಗ್ರಹಿಸಿದ ಒಟ್ಟು ಮೊತ್ತದಲ್ಲಿ ಶೇ.10 ಎಂಡೋಮೆಂಟ್ ಗಾಗಿ ಹಾಗೂ ಶೇ.5 ಆಡಳಿತಾತ್ಮಕ ವೆಚ್ಚಕ್ಕಾಗಿ ಉಳಿದ ಶೇ.85 ರಲ್ಲಿ 60:40 ಅನುಪಾತದಂತೆ ಗಣಿ ಬಾಧಿತ ಪ್ರದೇಶಗಳಲ್ಲಿ ಈ ಕೆಳಕಂಡ ಅಭಿವೃದ್ಧಿ ಕಾರ್ಯಗಳಿಗೆ ವಿನಿಯೋಗಿಸುವುದು ಮುಖ್ಯ ಉದ್ದೇಶವಾಗಿರುತ್ತದೆ.<br>**ಶೇಕಡ 60ರ ಅನುಪಾತದಲ್ಲಿ ಆಯೋಜಿಸುವ ಕಾರ್ಯಕ್ರಮಗಳು:**<br>1) ಕುಡಿಯುವ ನೀರು<br>2) ಪರಿಸರ ಸಂರಕ್ಷಣೆ ಮತ್ತು ಮಾಲಿನ್ಯ ನಿಯಂತ್ರಣದ ಅಳತೆ |

| | | |
|---|---|---|
| | (ಜಿಲ್ಲಾವಾರು ಮಾಹಿತಿ ಒದಗಿಸುವುದು) | 3) ಆರೋಗ್ಯ<br>4) ಶಿಕ್ಷಣ<br>5) ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಂಬಂಧ ಕಾರ್ಯಕ್ರಮ<br>6) ವಯಸ್ಸಾದ ಮತ್ತು ಅಂಗವಿಕಲ ವ್ಯಕ್ತಿಗಳ ಕಲ್ಯಾಣ<br>7) ಕೌಶಲ್ಯ ಅಭಿವೃದ್ಧಿ<br>8) ನೈರ್ಮಲ್ಯತೆ<br>**ಶೇಕಡ 40ರ ಅನುಪಾತದಲ್ಲಿ ಆಯೋಜಿಸುವ ಕಾರ್ಯಕ್ರಮಗಳು:**<br>1) ಭೌತಿಕ ಮೂಲಸೌಕರ್ಯ<br>2) ನೀರಾವರಿ<br>3) ಶಕ್ತಿ ಮತ್ತು ನೀರಿನ ಅಭಿವೃದ್ಧಿ<br>4) ಗಣಿಗಾರಿಕೆ ಜಿಲ್ಲೆಗಳಲ್ಲಿ ಪರಿಸರದ ಗುಣಮಟ್ಟ ಹೆಚ್ಚಿಸುವುದು<br>ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್ ನಲ್ಲಿ ಸಂಗ್ರಹಿಸಿದ ಹಾಗೂ ಉಳಿದಿರುವ ಮೊತ್ತದ ವಿವರ ಅನುಬಂಧ 1 ರಲ್ಲಿ ಪೂರೈಸಿದೆ. |
| ಈ). | ತುಮಕೂರು ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್ (ಡಿಎಂಎಫ್ ಟಿ) ಅಡಿ ಎಷ್ಟು ಹಣ ಲಭ್ಯವಿದೆ: ಈಗಾಗಲೇ ಕಾಮಗಾರಿಗಳಿಗೆ ಖರ್ಚು ಮಾಡಿರುವ ಹಣವೆಷ್ಟು: ಬಾಕಿ ಇರುವ ಹಣವೆಷ್ಟು (ತಾಲ್ಲೂಕುವಾರು ವಿವರವಾದ ಮಾಹಿತಿ ಒದಗಿಸುವುದು) | ತುಮಕೂರು ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್ (ಡಿಎಂಎಫ್ ಟಿ) ಅಡಿಯಲ್ಲಿ ರೂ. 32.95 ಕೋಟಿ ಸಂಗ್ರಹಿಸಿದ್ದು, ರೂ. 49.95 ಕೋಟಿ ಗೆ ಕ್ರಿಯಾ ಯೋಜನೆ ತಯಾರಿಸಿ ವಿವಿಧ ಕಾಮಗಾರಿಗಳಿಗೆ ರೂ.17.38 ಕೋಟಿ ಖರ್ಚಾಗಿರುತ್ತದೆ, ತಾಲೂಕುವಾರು ವಿವರ **ಅನುಬಂಧ-2** ರಲ್ಲಿ ನೀಡಲಾಗಿದೆ. |
| ಉ) | ಸದರಿ ಟ್ರಸ್ಟ್ ಯಡಿ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ವಿಧಾನ ಸಭೆ ಮತ್ತು ವಿಧಾನ ಪರಿಷತ್ ಸದಸ್ಯರುಗಳಿಗೆ ಕಾಮಗಾರಿಗಳಿಗೆ ಎಷ್ಟು ಹಣ ನಿಗಧಿಗೊಳಿಸಲಾಗಿದೆ ?<br>(ವಿವರವಾದ ಮಾಹಿತಿ ಇದಗಿಸುವುದು) | ಭಾರತ ಸರ್ಕಾರ ಗಣಿ ಮಂತ್ರಾಲಯದ ಆದೇಶ ದಿನಾಂಕ 23.04.2021 ರಂತೆ ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳು ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್ನ ಅಧ್ಯಕ್ಷರಾಗಿರುತ್ತಾರೆ.<br>ಸದರಿ ಟ್ರಸ್ಟ್ ಒಟ್ಟು 18 ಟ್ರಸ್ಟಿಗಳನ್ನು ಹೊಂದಿದ್ದು, ಅದರಲ್ಲಿ ವಿಧಾನ ಸಭಾ ಸದಸ್ಯರು ಹಾಗೂ ವಿಧಾನ ಪರಿಷತ್ ಸದಸ್ಯರು ಟ್ರಸ್ಟಿಗಳಾಗಿರುತ್ತಾರೆ. ಜಿಲ್ಲೆಯಲ್ಲಿ ಡಿಎಂಎಫ್ ಟಿ ಅಡಿಯಲ್ಲಿ ಸಂಗ್ರಹಿಸಿದ ಮೊತ್ತವನ್ನು PMKKKY ಮಾರ್ಗಸೂಚಿಯಂತೆ ಸಂಬಂಧಿಸಿದ ಕಾಮಗಾರಿಗಳಿಗೆ ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್ ಸಮಿತಿಯ ಅನುಮೋದನೆಯಂತೆ ಅನುದಾನವನ್ನು ಹಂಚಿಕೆ ಮಾಡಲಾಗುತ್ತಿದೆ. ಮುಂದುವರಿದು ವಿಧಾನ ಸಭೆ ಮತ್ತು ವಿಧಾನ ಪರಿಷತ್ ಸದಸ್ಯರು ಕೈಗೊಳ್ಳುವ ಕಾಮಗಾರಿಗಳಿಗೆ ನಿರ್ದಿಷ್ಟ ಹಣವನ್ನು ನಿಗದಿಪಡಿಸಲು ನಿಯಮಗಳಲ್ಲಿ ಅವಕಾಶವಿರುವುದಿಲ್ಲ. |

ಸಂಖ್ಯೆ ಸಿಐ 443 ಎಂಎಂಎನ್ 2021

Halappa BA

**(ಆಚಾರ್ ಹಾಲಪ್ಪ ಬಸಪ್ಪ)**
ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ
ಮತ್ತು ಮಕ್ಕಳ ಅಭಿವೃದ್ಧಿ ಮತ್ತು
ವಿಕಲಚೇತನರ, ಹಿರಿಯ ನಾಗರಿಕರ
ಸಬಲೀಕರಣ ಸಚಿವರು

ಅನುಬಂಧ-1

## ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್ ನಲ್ಲಿ ಸಂಗ್ರಹಿಸಿದ ಹಾಗೂ ಉಳಿದಿರುವ ಮೊತ್ತದ ವಿವರ

ರೂ.ಲಕ್ಷಗಳಲ್ಲಿ

| ಕ್ರ.ಸಂ | ಜಿಲ್ಲೆ | ಡಿಎಂಎಫ್ ಸಂಗ್ರಹಣೆ 2015-16 to ಜುಲೈ 2021 | 85% ಡಿಎಂಎಫ್ ಮೊತ್ತ (ಎಂಡೋಮೆಂಟ್ ಮತ್ತು ಆಡಳಿತಾತ್ಮಕ ವೆಚ್ಚ ಹೊರತುಪಡಿಸಿ ) | ಅನುಮೋದಿತ ಕ್ರಿಯಾ ಯೋಜನೆ ಮೊತ್ತ | ಖರ್ಚಾದ ಮೊತ್ತ | ಕೋವಿಡ್-19 ವೈರಾಣು ತಡೆಗಟ್ಟಲು ಖರ್ಚಾದ ಮೊತ್ತ | ಬಾಕಿ ಮೊತ್ತ |
|---|---|---|---|---|---|---|---|
| 1 | Ballari | 165784.29 | 140916.65 | 222215.50 | 49677.67 | 3225.00 | 88013.98 |
| 2 | Kalaburagi | 37219.88 | 31636.90 | 54084.42 | 9151.39 | 5852.00 | 16633.51 |
| 3 | Chitradurga | 25985.23 | 22087.45 | 30639.65 | 9234.96 | 2932.00 | 9920.49 |
| 4 | Bagalkot | 7754.07 | 6590.96 | 11410.20 | 3538.24 | 386.00 | 2666.72 |
| 5 | Koppal | 5291.66 | 4497.91 | 8512.12 | 3426.96 | 543.00 | 527.95 |
| 6 | Raichur | 4279.50 | 3637.58 | 7023.41 | 2903.33 | 387.00 | 347.25 |
| 7 | Chikkaballapur | 3845.91 | 3269.03 | 6672.24 | 974.14 | 379.00 | 1915.89 |
| 8 | Ramanagara | 3764.60 | 3199.91 | 2750.56 | 1630.97 | 490.00 | 1078.94 |
| 9 | Bangalore Urban | 3478.06 | 2956.35 | 6354.13 | 1629.21 | 194.56 | 1132.58 |
| 10 | Tumakuru | 3295.23 | 2800.94 | 4995.63 | 1738.92 | 230.00 | 832.02 |
| 11 | Bangalore Rural | 2722.26 | 2313.92 | 144.50 | 50.50 | 161.00 | 2102.42 |
| 12 | Belgaum | 2540.88 | 2159.75 | 1791.68 | 1567.50 | 126.00 | 466.26 |
| 13 | Chamarajanagar | 2309.01 | 1962.65 | 2201.97 | 304.74 | 297.00 | 1360.92 |
| 14 | Hassan | 1299.43 | 1104.52 | 653.63 | 558.38 | 15.00 | 531.14 |
| 15 | Uttara Kannada | 1201.64 | 1021.39 | 761.63 | 680.99 | 25.00 | 315.40 |
| 16 | Dakshina Kannada | 950.79 | 808.17 | 165.50 | 126.49 | 152.00 | 529.69 |
| 17 | Udupi | 873.78 | 742.72 | 446.07 | 411.58 | 112.76 | 218.38 |
| 18 | Chikmagalur | 867.31 | 737.21 | 665.24 | 486.88 | 0.00 | 250.33 |
| 19 | Kolar | 862.94 | 733.49 | 161.81 | 66.19 | 0.00 | 667.30 |
| 20 | Gadag | 677.23 | 575.65 | 494.32 | 139.39 | 60.00 | 376.26 |
| 21 | Dharwad | 648.91 | 551.57 | 265.40 | 52.66 | 100.00 | 398.91 |
| 22 | Haveri | 593.66 | 504.61 | 788.01 | 169.60 | 93.71 | 241.31 |
| 23 | Mandya | 511.08 | 434.42 | 359.50 | 0.00 | 24.00 | 410.42 |
| 24 | Davanagere | 482.13 | 409.81 | 532.43 | 398.94 | 16.00 | -5.13 |
| 25 | Vijayapura | 447.59 | 380.45 | 410.22 | 108.37 | 54.50 | 217.58 |
| 26 | Shivamogga | 234.24 | 199.10 | 56.94 | 27.36 | 39.00 | 132.74 |
| 27 | Mysuru | 188.36 | 160.11 | 177.19 | 9.44 | 23.00 | 127.67 |
| 28 | Bidar | 126.47 | 107.50 | 47.77 | 0.00 | 10.08 | 97.42 |
| 29 | Kodagu | 116.73 | 99.22 | 14.50 | 0.00 | 18.00 | 81.22 |
| 30 | Yadgir | 112.49 | 95.62 | 36.97 | 29.41 | 0.00 | 66.20 |
|  | Total | **278465.36** | **236695.55** | **364833.14** | **89094.19** | **15945.61** | **131655.75** |

ನಿರ್ದೇಶಕರು

ಅನುಬಂಧ-2

ತುಮಕೂರು ಜಿಲ್ಲೆಯಲ್ಲಿ ತಾಲೂಕುವಾರು ಸಂಗ್ರಹಗಿಸಿದ ಹಾಗೂ ಬಾಕಿ ಮೊತ್ತದ ವಿವರ

ರೂ.ಲಕ್ಷಗಳಲ್ಲಿ

| ಜಿಲ್ಲೆ | ತಾಲ್ಲೂಕು | ಡಿಎಂಎಫ್ ಸಂಗ್ರಹಣೆ | 85% ಡಿಎಂಎಫ್ ಮೊತ್ತ (ಎಂಡೋಮೆಂಟ್ ಮತ್ತು ಆಡಳಿತಾತ್ಮಕ ವೆಚ್ಚ ಹೊರತುಪಡಿಸಿ ) | ಅನುಮೋದಿತ ಕ್ರಿಯಾ ಯೋಜನೆ ಮೊತ್ತ | ಖರ್ಚಾದ ಮೊತ್ತ | ಬಾಕಿ ಮೊತ್ತ |
|---|---|---|---|---|---|---|
| A | B | C | D | G | H | (D-H) |
| Tumkur | Chikkanayakanahalli | 55.92 | 47.53 | 384.00 | 111.27 | 831.66 |
| | Gubbi | 2.85 | 2.42 | 367.78 | 111.56 | |
| | Koratagere | 567.28 | 482.19 | 406.00 | 135.33 | |
| | Kunigal | 1207.74 | 1026.58 | 368.33 | 139.32 | |
| | Madhugiri | 64.52 | 54.84 | 297.00 | 99.33 | |
| | Pavgada | 47.72 | 40.56 | 357.00 | 95.50 | |
| | Sira | 96.82 | 82.30 | 543.49 | 228.24 | |
| | Tiptur | 50.81 | 43.19 | 173.20 | 52.33 | |
| | Tumkur | 1167.07 | 992.01 | 2048.18 | 766.04 | |
| | Turuvekere | 34.50 | 29.33 | 50.65 | 0.00 | |
| | Total | 3295.23 | 2800.95 | 4995.63 | 1738.92 | |
| | Covid-19 Expenditure | | | | 230.37 | |
| | ಒಟ್ಟು ಮೊತ್ತ | 3295.23 | 2800.95 | 4995.63 | 1969.29 | |

CI 443 mmn 2021

ನಿರ್ದೇಶಕರು

ಶರವಾರಿ